ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 169 (1081) |
| ಸದಸ್ಯರ ಹೆಸರು | ಶ್ರೀಮತಿ ಭಾರತಿ ಶೆಟ್ಟಿ [ನಾಮ ನಿರ್ದೇಶನ ಹೊಂದಿದವರು] |
| ಉತ್ತರಿಸಬೇಕಾದ ದಿನಾಂಕ | 15-03-2021 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಶಿಕ್ಷಣದ ಗುರಿಗಳೇನು; | ❖ ಪೂರ್ವ ಪ್ರಾಥಮಿಕ ಶಿಕ್ಷಣದ ಗುರಿಗಳು :<br><br>3 ವರ್ಷ 5 ತಿಂಗಳ ವಯೋಮಾನದಿಂದ 5 ವರ್ಷ 5 ತಿಂಗಳ ವಯೋಮಾನದ ಮಕ್ಕಳಿಗೆ ಆರಂಭಿಕ ಕಲಿಕೆ ಹಾಗೂ ಶಿಶು ಆರೈಕೆ ಶಿಕ್ಷಣ ಒದಗಿಸುವುದು, ಮಕ್ಕಳ ಭೌತಿಕ ಹಾಗೂ ಜ್ಞಾನಾತ್ಮಕ ಬೆಳವಣಿಗೆಗೆ ಒತ್ತು ನೀಡುವುದು, ಮಕ್ಕಳಲ್ಲಿ ಸಾಮಾಜಿಕ, ಭಾವನಾತ್ಮಕ, ನೈತಿಕ ಹಾಗೂ ಸಾಂಸ್ಕೃತಿಕ / ಕಲಾತ್ಮಕ ಅಭಿವೃದ್ಧಿ ಸಾಧಿಸುವುದು, ಸಂವಹನ, ಆರಂಭಿಕ ಭಾಷೆ, ಅಕ್ಷರ ಜ್ಞಾನ ಮತ್ತು ಗಣಿತ ಕೌಶಲ್ಯಗಳನ್ನು ಹೆಚ್ಚಿಸುವುದು, ಮಕ್ಕಳಿಗೆ ಚಟುವಟಿಕೆ ಆಧಾರಿತ ಹಾಗೂ ಸ್ಪರ್ಶ ಜ್ಞಾನದಿಂದ ಕಲಿಕೆಯನ್ನು ಉಂಟುಮಾಡುವುದು.<br><br>❖ ಪ್ರಾಥಮಿಕ ಶಿಕ್ಷಣದ ಗುರಿಗಳು :<br><br>14 ವರ್ಷ ವಯೋಮಾನದವರೆಗಿನ ಎಲ್ಲಾ ಮಕ್ಕಳಿಗೆ 1 ರಿಂದ 8ನೇ ತರಗತಿಯ ಹಿರಿಯ ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕ ಲಭ್ಯತೆಯನ್ನು ಒದಗಿಸುವುದು, ಹಿರಿಯ ಪ್ರಾಥಮಿಕ ಶಿಕ್ಷಣಕ್ಕೆ ದಾಖಲಾತಿ ಮತ್ತು ಶಾಲೆಯಲ್ಲಿ ಉಳಿಯುವಿಕೆಯನ್ನು ಸಾರ್ವತ್ರೀಕರಣಗೊಳಿಸುವುದು ಮತ್ತು ಎಲ್ಲಾ ಮಕ್ಕಳು 8ನೇ ತರಗತಿಯನ್ನು ಪೂರ್ಣಗೊಳಿಸುವುದು, ಸಾರ್ವತ್ರೀಕರಣ ಎಂದರೆ ವಯೋಮಾನಕ್ಕೆ ಅನುಗುಣವಾಗಿ ದಾಖಲಾತಿ ಮತ್ತು ದಾಖಲಾದ ಎಲ್ಲಾ ವಿದ್ಯಾರ್ಥಿಗಳು ಹಿರಿಯ ಪ್ರಾಥಮಿಕ ಶಿಕ್ಷಣ ಪೂರ್ಣಗೊಳಿಸುವವರೆಗೆ ಶಾಲೆಯಲ್ಲಿ ಉಳಿಯುವುದು, ಜೀವನ ಕೌಶಲ್ಯ ಮತ್ತು ತೃಪ್ತಿದಾಯಕ ಗುಣಮಟ್ಟದೊಂದಿಗೆ ಅರ್ಥಪೂರ್ಣ ಶಾಲಾ ಶಿಕ್ಷಣ |

| | |
|---|---|
| | ಪೂರೈಸುವಿಕೆ, ಲಿಂಗ ಸಮಾನತೆ, ಸಾಮಾಜಿಕ ಗುಂಪುಗಳ ನಡುವಿನ ಸಮಾನತೆ ಹಾಗೂ ಪ್ರಾದೇಶಿಕ ಸಮಾನತೆಗಳನ್ನೊಳಗೊಂಡಂತೆ ಶೈಕ್ಷಣಿಕ ಅಭಿವೃದ್ಧಿ ಸಾಧಿಸುವುದು, ಶಾಲೆಯ ನಿರ್ವಹಣೆಯಲ್ಲಿ ಗ್ರಾಮೀಣ ಭಾಗದ ಜನವಸತಿಗಳಲ್ಲಿನ ಸಮುದಾಯಗಳ ಪೂರ್ಣ ಭಾಗವಹಿಸುವಿಕೆಯ ಮೂಲಕ 'ಸ್ವತಃ ವ್ಯವಸ್ಥಾಪಕ ಶಾಲೆಗಳು' ಗುರಿಯೆಡೆಗೆ ನಡೆಸುವುದು. |
| ಆ) ಸದರಿ ಶಿಕ್ಷಣದ ವ್ಯವಸ್ಥೆಯಿಂದ ಸ್ವಸ್ಥ ಸಮಾಜ ರೂಪಿಸುವಲ್ಲಿ ಕಂಡು ಬಂದಿರುವ ಕೊರತೆಗಳೇನು; | ಶಾಲೆಯಿಂದ ಮಕ್ಕಳು ಹೊರಗುಳಿಯುವುದು, ಬಾಲ ಕಾರ್ಮಿಕ ಪ್ರೋತ್ಸಾಹ, ಕುಟುಂಬಗಳಲ್ಲಿನ ವೈಮನಸ್ಸು, ಇತರ ಕಾರಣಗಳಿಂದಾಗಿ ಮಕ್ಕಳು ದಾರಿ ತಪ್ಪುವುದು, ಇತ್ಯಾದಿ. |
| ಇ) ಈ ಕೊರತೆಗಳನ್ನು ಸರಿಪಡಿಸಲು ಶಿಕ್ಷಣ ಇಲಾಖೆಯು ಸಮಾಜದ ಯಾವ ಯಾವ ಅಂಗಗಳಿಂದ ಯಾವ ರೀತಿಯ ಕ್ರಮಗಳನ್ನು ಬಯಸುತ್ತದೆ; | ಗ್ರಾಮೀಣ ಅಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆ, ನಗರ ಅಭಿವೃದ್ಧಿ ಇಲಾಖೆ, ಕಾರ್ಮಿಕ ಇಲಾಖೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಅಲ್ಪಸಂಖ್ಯಾತ ಇಲಾಖೆ, ಆರ್ಥಿಕ ಇಲಾಖೆ, ಕಂದಾಯ ಇಲಾಖೆ ಹಾಗೂ ಇತರೆ ಸ್ಥಳೀಯ ಸಂಸ್ಥೆಗಳ ಸಹಕಾರ ಹಾಗೂ ಸಮನ್ವಯದೊಂದಿಗೆ ಮತ್ತು ಸಮುದಾಯ ಹಾಗೂ ಪೋಷಕರ ಸಹಕಾರದಿಂದ ಕೊರತೆಗಳ ನಿವಾರಣೆಗಾಗಿ ಪ್ರಯತ್ನಿಸಲಾಗುತ್ತಿದೆ. |
| ಈ) ಇವುಗಳನ್ನು ಸಾಧಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ❖ 2019-20ನೇ ಸಾಲಿನಲ್ಲಿ 276 ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಿ ಪಠ್ಯಕ್ರಮ, ಕಲಿಕೋಪಕರಣಗಳು ಮತ್ತು ಶಿಕ್ಷಕಿಯರಿಗೆ ತರಬೇತಿಯನ್ನು ನೀಡಲಾಗಿದೆ.<br>❖ 2020-21ನೇ ಸಾಲಿನಲ್ಲಿ 908 ಸರ್ಕಾರಿ ಶಾಲೆಗಳಲ್ಲಿ ಎಸ್.ಡಿ.ಎಂ.ಸಿ ಪ್ರಾರಂಭಿಸಿರುವ ಪೂರ್ವ ಪ್ರಾಥಮಿಕ ತರಗತಿಗಳ ಶಿಕ್ಷಕಿಯರಿಗೆ ತರಬೇತಿ ನೀಡುವ ಸಂಬಂಧ ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿಯನ್ನು ನೀಡಿದ್ದು, ಶಿಕ್ಷಕಿಯರಿಗೆ ತರಬೇತಿ ನೀಡುವ ಹಾಗೂ ಶಾಲೆಗಳಿಗೆ ಪಠ್ಯಕ್ರಮ ಸರಬರಾಜು ಮಾಡುವ ಕ್ರಮ ಪ್ರಗತಿಯಲ್ಲಿದೆ.<br>❖ 06 ರಿಂದ 14 ವರ್ಷ ವಯೋಮಾನದ ಎಲ್ಲಾ ಮಕ್ಕಳಿಗೆ ಶಿಕ್ಷಣ ದೊರೆತಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳಲು, ಮನೆ-ಮನೆ ಸಮೀಕ್ಷೆ |

| | |
|---|---|
| | ಮೂಲಕ ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಗುರುತಿಸಿ, ಅವರಿಗೆ ವಿವಿಧ ಕಾರ್ಯತಂತ್ರಗಳ ಮೂಲಕ ಮುಖ್ಯವಾಹಿನಿಗೆ ತರಲಾಗುತ್ತಿದೆ.<br>❖ 06 ರಿಂದ 14 ವರ್ಷಗಳ ಉಚಿತ ಕಡ್ಡಾಯ ಹಾಗೂ ಗುಣಮಟ್ಟದ ಶಿಕ್ಷಣವನ್ನು ಒದಗಿಸಲು ಅಗತ್ಯವಿರುವ ಮೂಲಭೂತ ಸೌಲಭ್ಯಗಳು ಹಾಗೂ ಮಾನವ ಸಂಪನ್ಮೂಲಗಳನ್ನು ಒದಗಿಸಲಾಗುತ್ತಿದೆ.<br>❖ ಮಗುವಿನ ಸರ್ವತೋಮುಖ ಬೆಳವಣಿಗೆ ಸಾಧಿಸಲು ಶಿಕ್ಷಣವನ್ನು ಸಾಧನವನ್ನಾಗಿ ಆಧರಿಸಿ, ವಿವಿಧ ಕಾರ್ಯಕ್ರಮಗಳು ರೂಪಿಸಲಾಗಿದೆ.<br>❖ ಕಲಿಕಾ ಪ್ರಕ್ರಿಯೆಯನ್ನು ಸ್ಥಳೀಯವಾಗಿ ಶಿಶುಕೇಂದ್ರಿತ ಚಟುವಟಿಕಾಧಾರಿತ ಹಾಗೂ ಸಂತಸದಾಯಕವಾಗಿರುವಂತೆ ಮಾಡಲಾಗಿದೆ.<br>❖ ಶೈಕ್ಷಣಿಕ ಆಡಳಿತವನ್ನು ವಿಕೇಂದ್ರೀಕರಿಸಿ, ಸಮುದಾಯದ ಮಾಲೀಕತ್ವದೊಂದಿಗೆ ಮಕ್ಕಳ ಶಿಕ್ಷಣ ಹಕ್ಕನ್ನು ಪೂರೈಸಲು ಕ್ರಮವಹಿಸಲಾಗಿದೆ.<br>❖ ಮಧ್ಯಾಹ್ನದ ಉಪಹಾರ ಯೋಜನೆ, ಉಚಿತ ಪಠ್ಯ ಪುಸ್ತಕ, ಉಚಿತ ಸಮವಸ್ತ್ರ, ವಿದ್ಯಾರ್ಥಿ ವೇತನ, 8ನೇ ತರಗತಿ ವಿದ್ಯಾರ್ಥಿಗಳಿಗೆ ಉಚಿತ ಬೈಸಿಕಲ್, ಉಚಿತ ಶೂ ಮತ್ತು ಸಾಕ್ಸ್ ಇತ್ಯಾದಿ ಉತ್ತೇಜನಗಳ ಮೂಲಕ ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಬಲಪಡಿಸಲು ಕ್ರಮವಹಿಸಲಾಗುತ್ತಿದೆ. |
| **ಉ)** ಭಾರತದ ಶೈಕ್ಷಣಿಕ ಪರಮವೈಭವದ ಸ್ಥಿತಿಯನ್ನು ಮತ್ತೊಮ್ಮೆ ಕಾಣುವಂತಾಗಲು ಸರ್ಕಾರದ ಪ್ರಯತ್ನಗಳೇನು; | ಪಡೆ ಭಾರತ್–ಬಡೆ ಭಾರತ್ ಕಾರ್ಯಕ್ರಮ, ಬೇಟಿ ಬಚಾವೊ–ಬೇಟಿ ಪಡಾವೊ ಕಾರ್ಯಕ್ರಮ, ಸ್ವಚ್ಛ್‌ಭಾರತ್–ಸ್ವಚ್ಛ್ ವಿದ್ಯಾಲಯ, ತಂತ್ರಜ್ಞಾನ ಆಧಾರಿತ ಕಲಿಕೆಗೆ ಉತ್ತೇಜನ, ಶಿಕ್ಷಕರಿಗೆ ತಂತ್ರಜ್ಞಾನ ಉಪಯೋಗಿಸುವ ಬಗ್ಗೆ ತರಬೇತಿ, ವೃತ್ತಿ ಶಿಕ್ಷಣ (ಕೌಶಲ್ಯ ಆಧಾರಿತ ತರಬೇತಿ), ಶಾಲಾ ಸಿದ್ಧಿ, ಸಮುದಾಯದ ಭಾಗವಹಿಸುವಿಕೆಗೆ ಉತ್ತೇಜನ ನೀಡಿ ಸಂವಿಧಾನದ ಆಶಯಗಳಂತೆ, ಗುಣಮಟ್ಟ ಶಿಕ್ಷಣ ನೀಡಲು ಸರ್ಕಾರದ ವತಿಯಿಂದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. |
| **ಊ)** ದೈನಂದಿನ ಆಡಳಿತಾತ್ಮಕ ಸಮಸ್ಯೆಗಳನ್ನು ಬಗೆಹರಿಸುವುದರೊಂದಿಗೆ ಮೂಲ ಶಿಕ್ಷಣದ ಗುರಿಗಳ ಸಾಧನೆಗೆ ಸರ್ಕಾರ | ❖ ಆಡಳಿತಾತ್ಮಕ ಸಮಸ್ಯೆಗಳಿಗೆ ಪರಿಹಾರ ಕೊಂಡುಕೊಳ್ಳಲು ಹಾಗೂ ಸಮಯ ಸದ್ವಿನಿಯೋಗದ ನಿಟ್ಟಿನಲ್ಲಿ ಶಿಕ್ಷಕ ಮಿತ್ರ App |

| | |
|---|---|
| ಸಮಯ ನಿಗಧಿಪಡಿಸಿಕೊಂಡಿದೆಯೇ? | ಸಿದ್ಧಪಡಿಸಿ ಪರಿಹಾರ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>❖ ತಂತ್ರಜ್ಞಾನದ ಬಳಕೆ ಮೂಲಕ ಪರ್ಯಾಯ (virtual) ಸಭೆಗಳನ್ನು ಏರ್ಪಡಿಸಿ, ಶಿಕ್ಷಣದ ಗುರಿಗಳನ್ನು ಸಾಧಿಸಲು ಆಗಿಂದಾಗ್ಗೆ ಮಾರ್ಗದರ್ಶನ ನೀಡಲಾಗುತ್ತಿದೆ.<br>❖ 2030ರೊಳಗೆ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಜಾರಿಗೊಳಿಸಲು ಸೂಚಿಸಿದ್ದು, ಅದರಂತೆ ರಾಜ್ಯದಲ್ಲಿ ಸದರಿ ನೀತಿಯ ಅನುಷ್ಠಾನ ಸಂಬಂಧ 10 ವರ್ಷಗಳ ದೂರದೃಷ್ಟಿ ಯೋಜನೆಯನ್ನು ಶಿಕ್ಷಣ ಇಲಾಖಾ ವತಿಯಿಂದ ರೂಪಿಸಲು ಕ್ರಮವಹಿಸಲಾಗುತ್ತಿದೆ. |

ಇಪಿ 88 ಪಿಜಿಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.